ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೆರಡನೆಯ ಅಧಿವೇಶನ

ಶುಕ್ರವಾರ, ದಿನಾಂಕ: 11ನೇ ಡಿಸೆಂಬರ್, 2020

ರಾಜ್ಯದಲ್ಲಿ ವಿವಿದೆಡೆ ಚಿಕ್ಕ ಮಕ್ಕಳನ್ನು ಬಳಸಿಕೊಂಡು ಭಿಕ್ಷಾಟನೆ ಮಾಡುತ್ತಿರುವ ಬಗ್ಗೆ

ಶ್ರೀ ಕವಟಗಿಮಠ ಮಹಾಂತೇಶ್ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

435(510) ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ರಾಜ್ಯದಲ್ಲಿ ಮುಜರಾಯಿ ಇಲಾಖೆ ವ್ಯಾಪ್ತಿಗೆ ಒಳಪಡುವ ಹಾಗೂ ಒಳಪಡದ ಅನೇಕ ಪ್ರಸಿದ್ಧ ದೇವಾಲಯಗಳಿದ್ದು, ಈ ದೇವಸ್ಥಾನಗಳ ಸುತ್ತಮುತ್ತ, ರೈಲು ನಿಲ್ದಾಣ ಹಾಗೂ ಬಸ್ಸು ನಿಲ್ದಾಣಗಳ ಹತ್ತಿರ ನಗರದ ಸಿಗ್ನಲ್‌ಗಳ ಬಳಿ ಹಲವಾರು ಮಹಿಳೆಯರು ಮಕ್ಕಳನ್ನು ಮಡಿಲಲ್ಲಿ ಇಟ್ಟುಕೊಂಡು ಭಿಕ್ಷಾಟನೆ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ಚಿಕ್ಕ ಮಕ್ಕಳಿಗೆ ಮತ್ತು ಭರಿಸುವ ಔಷಧ ನೀಡಿ, ನಿದ್ರಿಸುವಂತೆ ಮಾಡಿ ಅವುಗಳನ್ನು ತೋರಿಸಿ, ಕರುಣೆ ಬರುವಂತೆ ಮಾಡಿ ಭಿಕ್ಷಾಟನೆ ನಡೆಸುತ್ತಾ ಮಕ್ಕಳ ಜೀವದ ಜೊತೆ ಆಟವಾಡುವವರ ಮೇಲೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ;

(ಇ) ಇಲ್ಲಿಯವರೆಗೆ ಇಂತಹ ಎಷ್ಟು ಮಕ್ಕಳನ್ನು ರಕ್ಷಿಸಲಾಗಿದೆ? (ಸಂಪೂರ್ಣ ವಿವರ ನೀಡುವುದು)